ರುಗದಿದ್ದರೆ ತಾನು 'ಅಗ್ನಿಪ್ರವೇಶ' ಮಾಡಿ ಪ್ರಾಣತ್ಯಾಗಮಾಡುವೆನೆಂದು ಭರತನು ನಿಯಿಸಿದ್ದೂ, ತನ್ನ ತಮ್ಮಂದಿರಲ್ಲಿ ಯಾವನು ಮೃತನಾದರೂ ತಾನು ಅವನೊಡನೆ ಅಯಲ್ಲಿ ಸಹಗಮಿಸುವೆನೆಂದು ಧರ್ಮರಾಜನು ಪ್ರತಿಜ್ಞೆ ಮಾಡಿದ್ದೂ, ಬದುಕು ದುರ್ಭರವಾದಾಗ ಬೆಟ್ಟದ ಶಿಖರದಿಂದ ಹಾರಿ ಪ್ರಾಣವನ್ನು ಕಳೆದುಕೊಳ್ಳುವ 'ಭೃಗುಪತನ'ವೂ —ಪುರಾಣೇತಿಹಾಸ ಕಾಲಗಳ ವೀರರ ಆತ್ಮಾರ್ಪಣೆಯ ಉದಾಹರಣೆಗಳು.

ಚರಿತ್ರೆಯ ಕಾಲಕ್ಕೆ ಬಂದರೆ, ರಾಜಪುತ್ರರ 'ಜೋಹರ್' ಪದ್ಧತಿಯನ್ನು ಅರಿಯದವರಾರು? ದಕ್ಷಿಣ ದೇಶದ—ಅದರಲ್ಲೂ ವಿಶೇಷವಾಗಿ ಕರ್ಣಾಟಕದ—'ವೀರಗಲ್ಲು'ಗಳನ್ನೂ 'ಮಾಸ್ತಿಗಲ್ಲು'ಗಳನ್ನೂ ನೋಡದವರಾರು? ಕೇಳದವರಾರು?

ಪತ್ನಿ ತನ್ನ ಪತಿಯನ್ನು ಕಳೆದುಕೊಂಡು ಹಿಂದೆ ಇರಲಾರದೆ, ಆತನ ಕಳೇಬರದೊಂದಿಗೆ ಅಗ್ನಿಯಲ್ಲಿ ತಾನೂ ಬೆಂದು ಬೂದಿಯಾದ ಕುಲವಧುಗಳ ಕಥೆ ಯಾರಿಗೊತ್ತಿಲ್ಲ? ಇಂತಹ 'ಮಹಾಸತಿ'ಯರಂತೆಯೇ ಅನೇಕ ವೀರಪುರುಷರು ಕೂಡ ಅತ್ಯಂತವಾದ ಸ್ವಾಮಿಭಕ್ತಿಯಿಂದ, ಅತ್ಯಂತವಾದ ದೇಶಪ್ರೇಮದಿಂದ ಅನ್ಯಾಯಗಳನ್ನು ಕ್ರೌರ್ಯಗಳನ್ನು ಜೀವಹಿಂಸೆಗಳನ್ನು ಎದುರಿಸಿ ನ್ಯಾಯ ಕರುಣೆ ಜೀವದಯೆಗಳನ್ನು ಎತ್ತಿಹಿಡಿಯುವುದಕ್ಕಾಗಿ ತಮ್ಮ ಪ್ರಾಣಗಳನ್ನು ಅರ್ಪಿಸಿರುವ ಅನೇಕ ಉದಾಹರಣೆಗಳುಂಟು. ಕಳ್ಳರು ಗೋವುಗಳನ್ನು ಅಪಹರಿಸಬಂದಾಗ, ಆನೆಯೋ ಹುಲಿಯೋ ಜನರಿಗೆ ಉಪದ್ರವಕೊಟ್ಟಾಗ, ಮಹಿಳೆಯರ ಮಾನಾಪಹಾರಕ್ಕೆ ಪ್ರಯತ್ನ ನಡೆದಾಗ ಸ್ವಾಮಿಯಾದವನಿಗೆ ಹಾನಿಸಂಭವಿಸಿದಾಗ, ದೇವದಾಯ ಧರ್ಮದಾಯ ಮೊದಲಾದವಕ್ಕೆ ತೊಂದರೆಯೊದಗಿದಾಗ—ಇಂತಹ ಸಂದರ್ಭಗಳಲ್ಲಿ ಧರ್ಮಪ್ರತಿಷ್ಠಾಪನೆಗೆ ಎದುರು ಹೋರಾಡಿ ಮಡಿದವರು ಎಷ್ಟೋ ಮಂದಿ. ಅವರ ಸ್ಮಾರಕಕ್ಕಾಗಿ ನಾಡು ನಿಲ್ಲಿಸಿದ ಕಲ್ಲುಗಳಿಗೆ 'ವೀರಗಲ್ಲು'ಗಳೆಂದು ಹೆಸರು. ಹಾಗೆಯೇ ಮಹಾಸತಿಯರ ನೆನಪಿನ 'ಮಾಸ್ತಿಗಲ್ಲು'ಗಳು.

ಪ್ರಕೃತದ 'ಶಾಂತಲಾ' ಕಾದಂಬರಿ ಚಿತ್ರಿಸಿರುವ ಕಾಲದಲ್ಲಿ ಇಂತಹ ಆತ್ಮಾರ್ಪಣೆಗಳು ಸಮಾಜದಲ್ಲಿ ಸಾಮಾನ್ಯವಾದ ಆಚಾರಗಳಾಗಿದ್ದುವು. ಇಲ್ಲಿ ಬರುವ— **ಗರುಡ—ಭೈರವ—ರಣಬಲಿ—ಸತಿ—ಸಲ್ಲೇಖನ—ಸಿದ್ಧತಲೆ**—ಇವುಗಳಿಗೆಲ್ಲ ಶಾಸನಗಳ ನಿಶ್ಚಿತಾಧಾರಗಳುಂಟು. ಹೀಗೆ ಪ್ರಾಣಾರ್ಪಣೆ ಮಾಡಿಕೊಂಡ ವೀರರನ್ನೂ ವೀರೆಯರನ್ನೂ ಸುಮ್ಮನೆ 'ಸತ್ತರು' ಎನ್ನುತ್ತಿರಲಿಲ್ಲ. "ಸತ್ತು ಸುರಲೋಕಕ್ಕೆ ಸಾರಿದ . . . ಸುರಲೋಕ ಪ್ರಾಪ್ತನಾದನ್ . . . ಸತಿ ಸಹಾನುಭೂತಿಯಂ ಪೊಂದೆ ಸುರಲೋಕಕ್ಕೆ ಸಂದಳು . . . ಮಾಸೇನರ್ ಸ್ವರ್ಗಾಗ್ರಮಾನೇಱಿದಾರ್" ಎಂದು ಅವರ ಸದ್ಗತಿಯನ್ನೇ ಹೇಳುತ್ತಿದ್ದರು. ಹಿಂದಿನ ಆ ವೀರಯುಗದಲ್ಲಿ ಈ ರೀತಿಯ ಪ್ರಾಣಾರ್ಪಣೆ ಒಂದು ಯೋಗವೆಂದು ಪರಿಗಣಿತವಾಗಿತ್ತು.